# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1952 (270) |
| ಸದಸ್ಯರ ಹೆಸರು | : | ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವವರು | : | ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು |
| ಉತ್ತರಿಸುವ ದಿನಾಂಕ | : | 23.03.2021 |

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕಾರ್ಖಾನೆಗಳ ಸಂಖ್ಯೆ ಎಷ್ಟು; (ವಿವರ ನೀಡುವುದು)</td><td>ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕೈಗಾರಿಕೆಗಳ ವಿವರಗಳು ಈ ಕೆಳಕಂಡಂತಿರುತ್ತವೆ:
<table>
<tr><th>ಜಿಲ್ಲೆ</th><th>ಮಧ್ಯಮ ಕೈಗಾರಿಕೆಗಳು</th><th>ಬೃಹತ್ ಕೈಗಾರಿಕೆಗಳು</th><th>ಒಟ್ಟು</th></tr>
<tr><td>ಬೆಂಗಳೂರು (ನಗರ)</td><td>1703</td><td>368</td><td>2071</td></tr>
<tr><td>ಬೆಂಗಳೂರು (ಗ್ರಾಮಾಂತರ)</td><td>265</td><td>27</td><td>292</td></tr>
</table></td></tr>
<tr><td>ಆ</td><td>ಸದರಿ ಕಾರ್ಖಾನೆಗಳಲ್ಲಿ ಸ್ಥಳೀಯರಿಗೆ ಮೀಸಲಿಟ್ಟಿರುವ ಉದ್ಯೋಗಾವಕಾಶಗಳ ಸಂಖ್ಯೆ ಎಷ್ಟು;</td><td>ಬೆಂಗಳೂರು ನಗರ ಜಿಲ್ಲೆಯಲ್ಲಿ ಒಟ್ಟು 2071 ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳಿದ್ದು, ಒಟ್ಟು 4,86,123 ಜನರಿಗೆ ಉದ್ಯೋಗ ನೀಡಿಕೆಯಾಗಿರುತ್ತದೆ. ಇದರಲ್ಲಿ 3,69,453 ಸ್ಥಳೀಯರು ಕಾರ್ಯನಿರ್ವಹಿಸುತ್ತಿದ್ದಾರೆ.<br><br>ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಒಟ್ಟು 292 ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳಿದ್ದು, ಒಟ್ಟು 27,281 ಜನರಿಗೆ ಉದ್ಯೋಗ ನೀಡಿಕೆಯಾಗಿರುತ್ತದೆ. ಇದರಲ್ಲಿ 24,826 ಸ್ಥಳೀಯರು ಕಾರ್ಯ ನಿರ್ವಹಿಸುತ್ತಿದ್ದಾರೆ.</td></tr>
<tr><td>ಇ</td><td>ಕಾರ್ಖಾನೆವಾರು ಯಾವ ಯಾವ ಹುದ್ದೆಗಳಿವೆ ; ಅವುಗಳಲ್ಲಿ ಸ್ಥಳೀಯರು ಯಾವ ಯಾವ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ: (ವಿವರ ನೀಡುವುದು)</td><td>ಕಾರ್ಖಾನೆಗಳಲ್ಲಿ ಎ, ಬಿ, ಸಿ ಮತ್ತು ಡಿ ವರ್ಗದ ಹುದ್ದೆಗಳಿರುತ್ತವೆ. ಕಂಪನಿಗಳು ತನ್ನ ಉದ್ದೇಶಿತ ಚಟುವಟಿಕೆಗೆ ಅಗತ್ಯವಿರುವ ತಂತ್ರಜ್ಞಾನ ಹಾಗೂ ವಿದ್ಯಾರ್ಹತೆಯನ್ನಾಧರಿಸಿ ನೇಮಕಾತಿಯನ್ನು ಮಾಡಿಕೊಳ್ಳುತ್ತಾರೆ.<br><br>ಕೈಗಾರಿಕಾ ನೀತಿ 2020-25 ರನ್ವಯ ರಿಯಾಯಿತಿ ಹಾಗೂ ಸೌಲಭ್ಯಗಳನ್ನು ಪಡೆಯುವ ಕೈಗಾರಿಕೆಗಳು, 'ಡಿ' ವರ್ಗದ ಹುದ್ದೆಗಳಲ್ಲಿ ಶೇ.100 ರಷ್ಟು ಸ್ಥಳೀಯರಿಗೆ ನೀಡಬೇಕಾಗಿದ್ದು, ಒಟ್ಟಾರೆಯಾಗಿ ಕನಿಷ್ಠ ಶೇ. 70 ರಷ್ಟು ಸ್ಥಳೀಯರಿಗೆ ಉದ್ಯೋಗಾವಕಾಶ ನೀಡಬೇಕಾಗಿದೆ.</td></tr>
</table>

| | | |
|---|---|---|
| ಈ | ಸದರಿ ಕಾರ್ಖಾನೆಗಳನ್ನು ಪ್ರಾರಂಭಿಸಲು ಸರ್ಕಾರ ಅನುಮತಿ ನೀಡುವಾಗ ವಿಧಿಸಿದ ಷರತ್ತುಗಳೇನು: ಅವುಗಳನ್ನು ಕಾರ್ಖಾನೆಗಳ ಆಡಳಿತ ಮಂಡಳಿ ಪಾಲಿಸುತ್ತಿವೆಯೇ; | ಕೈಗಾರಿಕಾ ನೀತಿ 2014-19 ಹಾಗೂ 2020-25 ರನ್ವಯ ರಿಯಾಯಿತಿ ಹಾಗೂ ಸೌಲಭ್ಯಗಳನ್ನು ಪಡೆಯುವ ಕೈಗಾರಿಕಾ ಘಟಕಗಳು "ಡಿ" ವರ್ಗದ ಉದ್ಯೋಗಗಳಲ್ಲಿ ಶೇಕಡ 100 ರಷ್ಟು ಹಾಗೂ ಘಟಕದ ಒಟ್ಟಾರೆ ಉದ್ಯೋಗಗಳಲ್ಲಿ ಶೇಕಡ 70 ರಷ್ಟನ್ನು ಸ್ಥಳೀಯರಿಗೆ ನೀಡುವ ಷರತ್ತು ಇರುತ್ತದೆ ಹಾಗೂ ಕೆ.ಐ.ಎ.ಡಿ.ಬಿ. ಕೈಗಾರಿಕಾ ಪ್ರದೇಶದಲ್ಲಿ ಜಮೀನು ಪಡೆದು ಪ್ರಾರಂಭಿಸುವ ಕೈಗಾರಿಕೆಗಳು, ಭೂಮಿಯನ್ನು ಕಳೆದುಕೊಂಡ ಕುಟುಂಬದವರಿಗೆ ಒಂದು ಕುಟುಂಬಕ್ಕೆ ಒಂದು ಉದ್ಯೋಗವನ್ನು ಅವರ ವಿದ್ಯಾರ್ಹತೆಗೆ ಅನುಗುಣವಾಗಿ ನೀಡಬೇಕಾಗಿರುತ್ತದೆ.<br><br>ಅದರಂತೆ ಉದ್ಯೋಗಗಳನ್ನು ನೀಡಿದ ಘಟಕಗಳಿಗೆ ಮಾತ್ರ ಅರ್ಹ ರಿಯಾಯಿತಿ ಹಾಗೂ ಸೌಲಭ್ಯಗಳನ್ನು ಮಂಜೂರು ಮಾಡಲಾಗುತ್ತಿದೆ.<br><br>ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳಲ್ಲಿರುವ ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳು ಸರ್ಕಾರ ವಿಧಿಸಿರುವ ಷರತ್ತುಗಳನ್ನು ಪಾಲಿಸದಿರುವ ಪ್ರಕರಣಗಳು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ವರದಿಯಾಗಿರುವುದಿಲ್ಲ. |
| ಉ | ಇಲ್ಲದಿದ್ದಲ್ಲಿ ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | |

ಸಿಐ 125 ಎಸ್‌ಪಿಐ 2021

(ಜಗದೀಶ್ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು